# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2434 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾಗಿದ್ದ ದಿನಾಂಕ | 30.03.2021 |
| ಉತ್ತರಿಸುವ ಸಚಿವರು | ವಸತಿ ಸಚಿವರು |

<table>
<tr><th>ಅನು ಕ್ರಮ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ರಾಜ್ಯದಲ್ಲಿ ಸ್ಥಾಪಿತವಾಗಿರುವ Real Estate Regulatory Authority (RERA) ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಿದೆಯೇ;</td><td>ಹೌದು.</td></tr>
<tr><td>ಆ</td><td>ಹಾಗಿದ್ದಲ್ಲಿ, ಕಳೆದ ಎರಡು ವರ್ಷಗಳಲ್ಲಿ (RERA) ಕಾರ್ಯನಿರ್ವಹಿಸಿರುವ ವಿವರಗಳನ್ನು ನೀಡುವುದು;</td><td>
ಕಳೆದ ಎರಡು ವರ್ಷಗಳು ಅಂದರೆ, ದಿನಾಂಕ: 20.03.2019 ರಿಂದ 20.03.2021 ರವರೆಗಿನ ಅವಧಿಯಲ್ಲಿ ಕರ್ನಾಟಕ ರಿಯಲ್ ಎಸ್ಟೇಟ್ ನಿಯಂತ್ರಣ ಪ್ರಾಧಿಕಾರವು ಯೋಜನೆಗಳ ನೋಂದಣಿ, ಯೋಜನೆಗಳ ಅವಧಿ ವಿಸ್ತರಣೆ, ಏಜೆಂಟರ ನೋಂದಣಿ ಹಾಗೂ ಗೃಹ ಖರೀದಿದಾರರು / ಅಭಿವೃದ್ಧಿದಾರರು / ಪ್ರಾಧಿಕಾರದಲ್ಲಿ ದಾಖಲಿಸಿರುವ ದೂರುಗಳ ಬಗೆಗಿನ ವಿವರಗಳು ಹಾಗೂ ದೂರುಗಳನ್ನು ವಿಲೇಗೊಳಿಸಿದ ಬಗೆಗಿನ ವಿವರಗಳು (ಮಾಹಿತಿಯು) ಕೆಳಕಂಡಂತಿವೆ:-<br><br>
(1) ಯೋಜನೆಗಳ ನೋಂದಣಿ:
<table>
<tr><th>ಕ್ರ. ಸಂ.</th><th>ಸದರಿ ಅವಧಿಯಲ್ಲಿ ಯೋಜನೆಯ ನೋಂದಣಿಗಾಗಿ ಸ್ವೀಕೃತವಾದ ಅರ್ಜಿಗಳ ಸಂಖ್ಯೆ</th><th>ನೋಂದಣಿಯಾದ ಯೋಜನೆಗಳ ಸಂಖ್ಯೆ</th><th>ತಿರಸ್ಕೃತವಾದ ಯೋಜನೆಗಳ ಸಂಖ್ಯೆ</th><th>ರದ್ದು ಮಾಡಲಾದ ಯೋಜನೆಗಳ ಸಂಖ್ಯೆ</th><th>ಹಿಂಪಡೆಯಲಾದ ಯೋಜನೆಗಳ ಸಂಖ್ಯೆ</th><th>ವರ್ಗಾವಣೆಯಾದ ಯೋಜನೆಗಳ ಸಂಖ್ಯೆ</th><th>ನೋಂದಣಿಗೆ ಬಾಕಿ ಇರುವ ಯೋಜನೆಗಳ (ಪರಿಶೀಲನೆಯಲ್ಲಿರುವ ಅರ್ಜಿಗಳು) ಸಂಖ್ಯೆ</th></tr>
<tr><td>1</td><td>1699</td><td>1272</td><td>20</td><td>01</td><td>0</td><td>03</td><td>403</td></tr>
</table>
(2) ಯೋಜನೆಗಳ ಅವಧಿ ವಿಸ್ತರಣೆ (ವಿಸ್ತರಣಾವಧಿ):
<table>
<tr><th>ಕ್ರ. ಸಂ.</th><th>ಸದರಿ ಅವಧಿಯಲ್ಲಿ ಸ್ವೀಕೃತವಾದ ಅರ್ಜಿಗಳ ಸಂಖ್ಯೆ</th><th>ಅವಧಿ ವಿಸ್ತರಿಸಿದ ಯೋಜನೆಗಳ ಸಂಖ್ಯೆ</th><th>ಯೋಜನಾ ವಿಸ್ತರಣೆಗಾಗಿ ಪರಿಶೀಲನೆಯಲ್ಲಿರುವ ಅರ್ಜಿಗಳ ಸಂಖ್ಯೆ</th><th>ಪ್ರವರ್ತಕರ ಬಳಿ ಬಾಕಿ ಇರುವ ಯೋಜನಾ ವಿಸ್ತರಣೆಗೆ ಸಂಬಂಧಿಸಿದ ಅರ್ಜಿಗಳ ಸಂಖ್ಯೆ</th></tr>
<tr><td>1</td><td>466</td><td>223</td><td>43</td><td>200</td></tr>
</table>
</td></tr>
</table>

**(3) ಏಜೆಂಟ್ ನೋಂದಣಿ:**

| ಕ್ರ. ಸಂ. | ಸದರಿ ಅವಧಿಯಲ್ಲಿ ಏಜೆಂಟ್ ನೋಂದಣಿಗೆ ಸ್ವೀಕೃತವಾದ ಅರ್ಜಿಗಳ ಸಂಖ್ಯೆ | ನೋಂದಣಿ ಯಾದ ಏಜೆಂಟ್ ಗಳ ಸಂಖ್ಯೆ | ತಿರಸ್ಕೃತ ವಾದ ಅರ್ಜಿಗಳ ಸಂಖ್ಯೆ | ನೋಂದಣಿ ರದ್ದು ಮಾಡಲಾದ ಏಜೆಂಟ್‌ಗಳ ಸಂಖ್ಯೆ | ಹಿಂಪಡೆಯ ಲಾದ ಅರ್ಜಿಗಳ ಸಂಖ್ಯೆ | ಪರಿಶೀಲನೆ ಯಲ್ಲಿರುವ ಅರ್ಜಿಗಳ ಸಂಖ್ಯೆ |
|---|---|---|---|---|---|---|
| 1 | 953 | 864 | 01 | 0 | 0 | 88 |

**(4) ದೂರುಗಳಿಗೆ ಸಂಬಂಧಿಸಿದ ವಿವರ:**

| ಕ್ರ.ಸಂ. | ಸದರಿ ಅವಧಿಯಲ್ಲಿ ಗೃಹ ಖರೀದಿದಾರರು / ಅಭಿವೃದ್ಧಿದಾರರು ಸಲ್ಲಿಸಿರುವ ದೂರುಗಳ ಸಂಖ್ಯೆ | ವಿಲೇಯಾದ ದೂರುಗಳ ಸಂಖ್ಯೆ |
|---|---|---|
| 1 | 3328 | 1950 |

| | | |
|---|---|---|
| ಇ | ಪ್ರಸಕ್ತದಲ್ಲಿ RERA ಸಂಸ್ಥೆಗೆ ಕಾಯ್ದೆ ನಿಯಮಗಳ ಅಡಿಯಲ್ಲಿ ಲಭ್ಯವಿರುವ ಅಧಿಕಾರಗಳು ಸಮರ್ಪಕವಾಗಿಲ್ಲ ದಿರುವುದರಿಂದ ಇತರೆ ಸ್ವತಂತ್ರ ಸಂಸ್ಥೆಗಳಾದ ಗ್ರಾಹಕ ಸಮಸ್ಯೆ ಪರಿಹಾರ ವೇದಿಕೆ ಮತ್ತು ಇತರೆ ಆಯೋಗಗಳಂತೆ ಅಧಿಕಾರ ನೀಡಲಾದ ಕಾಯ್ದೆಗೆ ತಿದ್ದುಪಡಿ ಪ್ರಸ್ತಾವನೆಯನ್ನು ಕಳುಹಿಸಲಾಗಿದೆಯೇ; | ಕೇಂದ್ರ ಸರ್ಕಾರವು "ರಿಯಲ್ ಎಸ್ಟೇಟ್ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 2016" ಎಂಬ ಕಾಯ್ದೆ (ಅಧಿನಿಯಮ) ಯನ್ನು ರಚಿಸಿರುತ್ತದೆ ಹಾಗೂ ಅದನ್ನು ದಿನಾಂಕ: 26.03.2016 ರಿಂದ ಜಾರಿಗೆ ತಂದಿರುತ್ತದೆ. ಅದರ ಮೇರೆಗೆ, ಕರ್ನಾಟಕ ಸರ್ಕಾರವು ರಾಜ್ಯದಲ್ಲಿ "ಕರ್ನಾಟಕ ರಿಯಲ್ ಎಸ್ಟೇಟ್ (ನಿಯಂತ್ರಣ ಮತ್ತು ಅಭಿವೃದ್ಧಿ) ನಿಯಮಗಳು, 2017" ಎಂಬ ನಿಯಮಗಳನ್ನು ದಿನಾಂಕ: 11.07.2017 ರಿಂದ ಜಾರಿಗೆ ತಂದಿರುತ್ತದೆ. ಸದರಿ ಕಾಯ್ದೆ ಮತ್ತು ನಿಯಮಗಳನುಸಾರ ಲಭ್ಯವಿರುವ ಅಧಿಕಾರಗಳನ್ನು ಕರ್ನಾಟಕ ರಿಯಲ್ ಎಸ್ಟೇಟ್ ನಿಯಂತ್ರಣ (ರೇರಾ) ಪ್ರಾಧಿಕಾರವು ಬಳಸಿಕೊಂಡು ತನ್ನ ಕಾರ್ಯವನ್ನು ಸಮರ್ಪಕವಾಗಿ ನಿರ್ವಹಿಸುತ್ತಿದೆ. ಈ ಕಾರಣ, ರಾಜ್ಯ ಸರ್ಕಾರವು ಸದರಿ ಕಾಯ್ದೆಗೆ ತಿದ್ದುಪಡಿ ತರುವಂತೆ ಕೋರಿ ಕೇಂದ್ರ ಸರ್ಕಾರಕ್ಕೆ ಯಾವುದೇ ಪ್ರಸ್ತಾವನೆಯನ್ನು ಕಳುಹಿಸಿರುವುದಿಲ್ಲ ಹಾಗೂ ರೇರಾ ಕಾಯ್ದೆಗೆ ಪ್ರಸ್ತುತ ಯಾವುದೇ ತಿದ್ದುಪಡಿ ತರುವ ಅವಶ್ಯಕತೆ ಕಂಡು ಬರುತ್ತಿಲ್ಲ. |
| ಈ | ಹಾಗಿದ್ದಲ್ಲಿ, ಈ ಪ್ರಸ್ತಾವನೆಯನ್ನು ಕೇಂದ್ರ ಸರ್ಕಾರಕ್ಕೆ ಕಳುಹಿಸಲು ಕೈಗೊಂಡ ಕ್ರಮಗಳೇನು? | ಉದ್ಭವಿಸುವುದಿಲ್ಲ |

[ಸಂಖ್ಯೆ: ವಇ 50 ರೇರಾ 2021]

(ವಿ. ಸೋಮಣ್ಣ)
ವಸತಿ ಸಚಿವರು.